## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1360 |
| ಸದಸ್ಯರ ಹೆಸರು | : ಶ್ರೀ. ಕೆ.ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : 23.09.2021 |
| ಉತ್ತರಿಸುವ ಸಚಿವರು | : ಮಾನ್ಯ ಜಲಸಂಪನ್ಮೂಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ನೀರಾವರಿ ನಿಗಮದಿಂದ ನಿರ್ವಹಿಸಲ್ಪಡುತ್ತಿರುವ ಸೌಕೂರು ಏತ ನೀರಾವರಿ ಯೋಜನೆ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣವೆಷ್ಟು; (ಗ್ರಾಮವಾರು ವಿಸ್ತೀರ್ಣ ಒದಗಿಸುವುದು) ಕಿಂಡಿ ಅಣೆಕಟ್ಟುಗಳ ಹಾಗೂ ಚೆಕ್ ಡ್ಯಾಂಗಳ ಸಂಖ್ಯೆ ಎಷ್ಟು; ಗ್ರಾವಿಟಿ ಮತ್ತು ರೈಸಿಂಗ್ ಮೈನ್ ಕಾಲುವೆಗಳು ಹಾದುಹೋಗುವ ಗ್ರಾಮಗಳು ಯಾವುವು; ಯಾವ ಯಾವ ಗ್ರಾಮಗಳಲ್ಲಿ ಕಿಂಡಿ ಅಣೆಕಟ್ಟು ಹಾಗೂ ಚೆಕ್ ಡ್ಯಾಂಗಳನ್ನು ನಿರ್ಮಿಸಲಾಗಿದೆ; ಕಾಮಗಾರಿಗಳ ಅಂದಾಜು ಮೊತ್ತವೆಷ್ಟು; ಕಾಮಗಾರಿಗಳ ಟೆಂಡರ್ ಮೊತ್ತವೆಷ್ಟು; ಕರಾರು ಪತ್ರದ ಮೊತ್ತವೆಷ್ಟು; (ಗುತ್ತಿಗೆದಾರರ ಹೆಸರು ಮತ್ತು ವಿಳಾಸ ಒದಗಿಸುವುದು ಮಂಜೂರಾತಿ ಪ್ರತಿ ಮತ್ತು ಅಂದಾಜು ಪಟ್ಟಿ ಪ್ರತಿಯನ್ನು ಒದಗಿಸುವುದು) | ಸೌಕೂರು ಏತ ನೀರಾವರಿ ಯೋಜನೆಯ ವಿವರಗಳು ಕೆಳಗಿನಂತಿವೆ:-<br>➢ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣ – 1,350 ಹೆಕ್ಟೇರ್‌ಗಳು<br>➢ ಗ್ರಾಮವಾರು ವಿಸ್ತೀರ್ಣ – **ಅನುಬಂಧ-1** ರಲ್ಲಿ ಒದಗಿಸಲಾಗಿದೆ.<br>➢ ಕಿಂಡಿ ಅಣೆಕಟ್ಟುಗಳ ಸಂಖ್ಯೆ – ಸದರಿ ಯೋಜನೆಯಡಿ ಯಾವುದೇ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿ ಇರುವುದಿಲ್ಲ.<br>➢ ಚೆಕ್ ಡ್ಯಾಂಗಳ ಸಂಖ್ಯೆ: ಒಟ್ಟು 33 ಸಂಖ್ಯೆಗಳ ಪೈಕಿ 14 ಚೆಕ್ ಡ್ಯಾಂಗಳು ಭಾಗಶಃ ಪೂರ್ಣಗೊಂಡಿರುತ್ತದೆ.<br>➢ ಗ್ರ್ಯಾವಿಟಿ ಮೇನ್ ಮತ್ತು ರೈಸಿಂಗ್ ಮೇನ್ ಹಾದು ಹೋಗುವ ಗ್ರಾಮಗಳು ಚೆಕ್ ಡ್ಯಾಂಗಳನ್ನು ನಿರ್ಮಾಣ ಮಾಡಲು ಯೋಜಿಸಿರುವ ಗ್ರಾಮಗಳ ವಿವರವನ್ನು **ಅನುಬಂಧ-2** ರಲ್ಲಿ ಒದಗಿಸಲಾಗಿದೆ.<br>➢ ಅಂದಾಜು ಮೊತ್ತ – ರೂ.73.71 ಕೋಟಿಗಳು.<br>➢ ಟೆಂಡರ್ ಮೊತ್ತ/ಗುತ್ತಿಗೆ ಕರಾರು ಮೊತ್ತ – ರೂ.71.74 ಕೋಟಿಗಳು. ( ಜಿ.ಎಸ್.ಟಿ. ಹೊರತುಪಡಿಸಿ)<br>➢ ಗುತ್ತಿಗೆದಾರರ ಹೆಸರು ಮತ್ತು ವಿಳಾಸ – ಶ್ರೀ ಜಿ.ಶಂಕರ್, ಕನೀನಿನಿ., ಪ್ರಥಮ ದರ್ಜೆ ಗುತ್ತಿಗೆದಾರರು, ವಿಜಯಪುರ.<br>➢ ಮಂಜೂರಾತಿ ಪ್ರತಿ ಮತ್ತು ಅಂದಾಜು ಪಟ್ಟಿ ಪ್ರತಿ – **ಅನುಬಂಧ 3 ಮತ್ತು 4** ರಲ್ಲಿ ಒದಗಿಸಲಾಗಿದೆ. (ಅಡಕ ಮುದ್ರಿಕೆಯೊಂದಿಗೆ). |
| ಆ | ಕರ್ನಾಟಕ ನೀರಾವರಿ ನಿಗಮದಿಂದ ನಿರ್ವಹಿಸಲಾಗುತ್ತಿರುವ ಗುಂಡೂರು ನೀರಾವರಿ ಯೋಜನೆಯ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣವೆಷ್ಟು; (ಗ್ರಾಮವಾರು ವಿಸ್ತೀರ್ಣ ಒದಗಿಸುವುದು) ಗ್ರಾವಿಟಿ ಮತ್ತು ರೈಸಿಂಗ್ ಮೈನ್ ಕಾಲುವೆಗಳು ಹಾದುಹೋಗುವ ಗ್ರಾಮಗಳು ಯಾವುವು; ಕಿಂಡಿ ಅಣೆಕಟ್ಟುಗಳ ಹಾಗೂ ಚೆಕ್ ಡ್ಯಾಂಗಳ ಸಂಖ್ಯೆ ಎಷ್ಟು; ಯಾವ ಯಾವ ಗ್ರಾಮಗಳಲ್ಲಿ ಕಿಂಡಿ ಅಣೆಕಟ್ಟು | ಗುಂಡೂರು ಗ್ರಾಮದ ಬಳಿ ಸೌಪರ್ಣಿಕ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಸೌಪರ್ಣಿಕ ಏತ ನೀರಾವರಿ ಯೋಜನೆಯ ವಿವರಗಳು ಕೆಳಗಿನಂತಿರುತ್ತದೆ:-<br>➢ ಅಚ್ಚುಕಟ್ಟು ಪ್ರದೇಶದ ವಿಸ್ತೀರ್ಣ – 1,730 ಹೆಕ್ಟೇರ್‌ಗಳು<br>➢ ಗ್ರಾಮವಾರು ವಿಸ್ತೀರ್ಣ – **ಅನುಬಂಧ-5** ರಲ್ಲಿ ಲಗತ್ತಿಸಲಾಗಿದೆ.<br>➢ ಗ್ರಾವಿಟಿ ಮೇನ್, ರೈಸಿಂಗ್ ಮೇನ್ ಹಾದುಹೋಗುವ ಗ್ರಾಮಗಳು ಮತ್ತು ಚೆಕ್ ಡ್ಯಾಂಗಳನ್ನು ನಿರ್ಮಾಣ ಮಾಡಲಾಗಿರುವ ಗ್ರಾಮಗಳ ವಿವರಗಳನ್ನು – **ಅನುಬಂಧ -6** ರಲ್ಲಿ ಲಗತ್ತಿಸಿದೆ. |

| | | |
|---|---|---|
| | ಹಾಗೂ ಚೆಕ್ ಡ್ಯಾಂಗಳನ್ನು ನಿರ್ಮಿಸಲಾಗಿದೆ; ಕಾಮಗಾರಿಗಳ ಅಂದಾಜು ಮೊತ್ತವೆಷ್ಟು; ಕಾಮಗಾರಿಗಳ ಟೆಂಡರ್ ಮೊತ್ತವೆಷ್ಟು; ಕರಾರು ಪತ್ರದ ಮೊತ್ತವೆಷ್ಟು; (ಗುತ್ತಿಗೆದಾರರ ಹೆಸರು ಮತ್ತು ವಿಳಾಸ ಮಂಜೂರಾತಿ ಪ್ರತಿ ಮತ್ತು ಅಂದಾಜುಪಟ್ಟಿ ಪ್ರತಿಯನ್ನು ಒದಗಿಸುವುದು) | ➢ ಕಿಂಡಿ ಅಣೆಕಟ್ಟು – ಸೌಪರ್ಣಿಕ ನದಿಗೆ ಅಡ್ಡಲಾಗಿ ಒಂದು ಸೇತುವೆ ಸಹಿತ ಬ್ಯಾರೇಜ್‌ನ್ನು (Bridge cum Barrage) ನಿರ್ಮಿಸಲಾಗಿರುತ್ತದೆ.<br>➢ ಚೆಕ್‌ಡ್ಯಾಂ – 25 ಸಂಖ್ಯೆ.<br>➢ ಅಂದಾಜು ಮೊತ್ತ – ರೂ.64.65 ಕೋಟಿಗಳು.<br>➢ ಟೆಂಡರ್ ಮೊತ್ತ /ಗುತ್ತಿಗೆ ಕರಾರು ಮೊತ್ತ – ರೂ.89.98 ಕೋಟಿಗಳು.<br>➢ ಗುತ್ತಿಗೆದಾರರ ಹೆಸರು ಮತ್ತು ವಿಳಾಸ – ಶ್ರೀ ಜಿ.ಶಂಕರ್, ಕನೀನಿನಿ., ಪ್ರಥಮ ದರ್ಜೆ ಗುತ್ತಿಗೆದಾರರು, ವಿಜಯಪುರ.<br>➢ ಮಂಜೂರಾತಿ ಪ್ರತಿ ಮತ್ತು ಅಂದಾಜು ಪಟ್ಟಿ ಪ್ರತಿ– **ಅನುಬಂಧ 7** ರಲ್ಲಿ ಲಗತ್ತಿಸಿದೆ (ಅಡಕ ಮುದ್ರಿಕೆಯೊಂದಿಗೆ). |
| ಇ | ಕಳೆದ ಮೂರು ವರ್ಷಗಳಲ್ಲಿ ಗುಂಡೂರು ನೀರಾವರಿ ಯೋಜನೆಯ ವಾರ್ಷಿಕ ನಿರ್ವಹಣೆಯ ವೆಚ್ಚವೆಷ್ಟು; ಯಾವ ಯಾವ ಉದ್ದೇಶಗಳಿಗೆ ವೆಚ್ಚವನ್ನು ಮಾಡಲಾಗಿದೆ? (ವೆಚ್ಚವಾರು, ವರ್ಷವಾರು ಮಾಹಿತಿಯನ್ನು ನೀಡುವುದು) | ಸೌಪರ್ಣಿಕಾ ಏತ ನೀರಾವರಿ ಯೋಜನೆಯು 2012ನೇ ಸಾಲಿನಲ್ಲಿ ಪೂರ್ಣಗೊಂಡಿದ್ದು, ಸೌಪರ್ಣಿಕಾ ನೀರಾವರಿ ಯೋಜನೆಯಡಿ ಸುತ್ತಮುತ್ತಲಿನ ಗ್ರಾಮಗಳಿಗೆ ಕುಡಿಯುವ ನೀರು ಮತ್ತು ನೀರಾವರಿ ಸೌಲಭ್ಯವನ್ನು ಒದಗಿಸಲಾಗುತ್ತಿದ್ದು, ಸದರಿ ಕುಡಿಯುವ ನೀರು ಮತ್ತು ನೀರಾವರಿ ಸೌಲಭ್ಯವನ್ನು ಒದಗಿಸುವುದಕ್ಕೆ ಸಂಬಂಧಿಸಿದಂತೆ ಲಿಫ್ಟ್‌ನ ಪಂಪ್, ಬ್ಯಾರೇಜ್ ಹಾಗೂ ಯಂತ್ರೋಪಕರಣಗಳ ದುರಸ್ತಿ ಹಾಗೂ ಸ್ಥಳದ ಉಸ್ತುವಾರಿ ಮತ್ತು ನಿರ್ವಹಣೆಗಾಗಿ ಮಾನವಶಕ್ತಿಯನ್ನು ಒದಗಿಸುವುದು ಹಾಗೂ ಇತರೆ ಅಗತ್ಯ ನಿರ್ವಹಣಾ ಕೆಲಸಗಳಿಗಾಗಿ ಕಳೆದ ಮೂರು ವರ್ಷಗಳಲ್ಲಿ ವಾರ್ಷಿಕ ನಿರ್ವಹಣೆಯ ವೆಚ್ಚದ ವಿವರಗಳು ಕೆಳಗಿನಂತಿವೆ:-<br><br>ಕ್ರ.ಸಂ \| ಕ್ಷೇತ್ರ \| ವೆಚ್ಚ (ರೂ.ಲಕ್ಷಗಳಲ್ಲಿ)<br>1 \| ಬೈಂದುರು \| 61.48<br>2 \| ಬೈಂದುರು \| 56.92<br>3 \| ಬೈಂದುರು \| 38.83 |

ಸಂಖ್ಯೆ: ಜಸಂಇ 189 ಎಂಎಲ್‌ಎ 2021

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು.

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1360ಕ್ಕೆ ಅನುಬಂಧ-1

ಸೌಕೂರು ಏತ ನೀರಾವರಿ ಯೋಜನೆಗೆ ಒಳಪಡುವ ಗ್ರಾಮವಾರು ಅಚ್ಚುಕಟ್ಟು ಪ್ರದೇಶದ ವಿವರ

**Command Area details in Sowkuru Lift Irrigation Scheme**

| Sl. No. | Village Name | Command Area Name | Gross Command area (GCA) Ha | Cultivable Command Area (CCA) Ha |
|---|---|---|---|---|
| 1 | KARKUNJE | Block-1 | 42.31 | 25.43 |
| | | Block-2 | 45.17 | 27.15 |
| | | Block-3 | 48.02 | 28.86 |
| 2 | KENCHANOORU PROPER | Block-4 | 112.69 | 67.72 |
| | | Block-5 | 100.66 | 60.49 |
| | | Block-6 | 82.86 | 49.80 |
| | | Block-7 | 86.99 | 52.28 |
| | | Block-8 | 65.15 | 39.15 |
| | | Block-9 | 29.76 | 17.88 |
| | | Block-10 | 45.94 | 27.61 |
| | | Block-11 | 41.99 | 25.24 |
| 3 | DEVALKUNDA | Block-12 | 64.61 | 38.83 |
| 4 | BANDIKANYANA GRAMA | Block-13 | 175.55 | 105.50 |
| | | Block-14 | 127.79 | 76.80 |
| | | Block-15 | 53.83 | 32.35 |
| | | Block-16 | 39.26 | 23.59 |
| | | Block-17 | 51.27 | 30.81 |
| | | Block-18 | 72.75 | 43.72 |
| | | Block-19 | 35.39 | 21.27 |
| 5 | HORLIBYLU | Block-20 | 99.41 | 59.74 |
| | | Block-21 | 112.63 | 67.69 |
| 6 | BADABETTU | Block-22 | 48.97 | 29.43 |
| | | Block-23 | 38.45 | 23.11 |
| 7 | HATTIYANGADI | Block-24 | 92.26 | 55.45 |
| | | Block-25 | 92.24 | 55.44 |
| | | Block-26 | 80.89 | 48.61 |
| 8 | GULWAAADI | Block-27 | 59.21 | 35.58 |
| | | Block-28 | 41.39 | 24.88 |
| | | Block-29 | 104.71 | 62.93 |
| | | Block-30 | 54.86 | 32.97 |
| | | Block-31 | 39.36 | 23.65 |
| | | Block-32 | 25.04 | 15.05 |
| | | Block-33 | 34.91 | 20.98 |
| **TOTAL** | | | **2246.32** | **1350.00** |

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1360ಕ್ಕೆ ಅನುಬಂಧ-2**

**ಗ್ರಾವಿಟಿ ಮತ್ತು ರೈಸಿಂಗ್ ಮೈನ್ ಪೈಪ್ ಲೈನ್ ಹಾದುಹೋಗುವ ಗ್ರಾಮಗಳ ವಿವರ ಹಾಗೂ ಚೆಕ್ ಡ್ಯಾಂಗಳ ನಿರ್ಮಾಣ ಭಾಗತಃ ಪೂರ್ಣಗೊಂಡಿರುವ ಗ್ರಾಮಗಳ ವಿವರ**

| ಕ್ರಸಂ | ಗ್ರಾವಿಟಿ ಮೈನ್ ಪೈಪ್‌ಲೈನ್ ಹಾದುಹೋಗುವ ಗ್ರಾಮಗಳ ವಿವರ | ರೈಸಿಂಗ್ ಮೈನ್ ಪೈಪ್‌ಲೈನ್ ಹಾದುಹೋಗುವ ಗ್ರಾಮಗಳ ವಿವರ | ಪ್ರಗತಿಯಲ್ಲಿರುವ ಚೆಕ್ ಡ್ಯಾಂಗಳ ಗ್ರಾಮಗಳ ವಿವರ |
|---|---|---|---|
| 1 | ಮಾಪಿನಕಟ್ಟೆ | ಗುಲ್ವಾಡಿ ಪ್ರಾಪರ್ | ಯೇಳನಕಟ್ಟೆ |
| 2 | ಶೆಟ್ಟರಕಟ್ಟೆ | ಬೋಳಕಟ್ಟೆ | ಸುಶೀಲಾ ಸದನ-ಕೆಂಚನೂರು |
| 3 | ತಳಗದ್ದೆ | ದುರ್ಗಾನಗರ | ಕೂಡ್ಲು (2 ಚೆಕ್ ಡ್ಯಾಂ) |
| 4 | ಕೂಡ್ಲುಗುಡ್ಡೆ-ಅಮ್ಮಾಡಿ | ಮಾಪಿನಕಟ್ಟೆ | ಕೂಡ್ಲುಗುಡ್ಡೆ |
| 5 | ಗುಲ್ವಾಡಿ | ನೇರಳಕಟ್ಟೆ | ಜಾಡಿ/ದೇವಸ |
| 6 | ಹಟ್ಟಿಯಂಗಡಿ ಕ್ರಾಸ್ | ಕರ್ಕುಂಜೆ ಪ್ರಾಪರ್ | ಕೆಂಚನೂರು (5 ಚೆಕ್ ಡ್ಯಾಂ) |
| 7 | ಬಂಡಾಡಿ | ---- | ಬೈಲುಮನೆ |
| 8 | ಹೋರಿಬೈಲು | ---- | ರಾಜಾಡಿ |
| 9 | ---- | ---- | ಬಂಡೀಕನ್ಯಾನ ಗ್ರಾಮ |

ಒಟ್ಟು ಗುರುತಲ್ಲದ ಪ್ರತಿ ಸಂಖ್ಯೆ: 136084
ಅನುಬಂಧ - 3



ಕರ್ನಾಟಕ ನೀರಾವರಿ ನಿಗಮ ನಿಯಮಿತ
(ಕರ್ನಾಟಕ ಸರ್ಕಾರದ ಉದ್ಯಮ)

01C


ಕರ್ನಾಟಕ ನೀರಾವರಿ ನಿಗಮ ನಿಯಮಿತ,
ನೋಂದಾಯಿತ ಕಛೇರಿ: 4ನೇ ಮಹಡಿ, ಕಾಫಿ ಮಂಡಳಿ ಕಟ್ಟಡ, ನಂ.1,
ಡಾ॥ ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು-560 001
CIN No: U85110KA1998SGC024503
Ph: 080 – 22283074-78 Fax: 080-22386015
e-mail: knnl@knnlindia.com
Website: www.knnlindia.com

ಮುಖ್ಯ ಇಂಜಿನಿಯರ್‌ರವರ ಕಛೇರಿ,
ಕರ್ನಾಟಕ ನೀರಾವರಿ ನಿಗಮ ನಿಯಮಿತ,
ತುಂಗಾ ಮೇಲ್ದಂಡೆ ಯೋಜನಾ ವಲಯ,
ಸಾಗರ ರಸ್ತೆ, ಶಿವಮೊಗ್ಗ-577 201,
E-mail: ceutpknnlsmg@gmail.com
Ph: 08182-256749 Fax: 08182-258872


*************************************************************************

ಮುಖ್ಯ ಇಂಜಿನಿಯರ್, ಕರ್ನಾಟಕ ನೀರಾವರಿ ನಿಗಮ ನಿಯಮಿತ,
ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ ಇವರ ಕಛೇರಿ ನಡವಳಿಗಳು

ವಿಷಯ: ಉಡುಪಿ ಜಿಲ್ಲೆ,ಕುಂದಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಸೌಕುರು ಏತ ನೀರಾವರಿ ಯೋಜನೆ ಕಾಮಗಾರಿಯ ಅಂದಾಜುಪಟ್ಟಿ ಮಂಜೂರಾತಿ ಬಗ್ಗೆ

ಉಲ್ಲೇಖ:
1. ಈ ಕಚೇರಿ ಪತ್ರ ಸಂ:ಕ್ಯಾಂಪ್ ಬೆಂಗಳೂರು ,ದಿನಾಂಕ:30.05.2019.
2. ಈ ಕಚೇರಿ ಪತ್ರ ಸಂ:ಕ್ಯಾಂಪ್ ಬೆಂಗಳೂರು ,ದಿನಾಂಕ:03.07.2019.
3. ದಿನಾಂಕ:03.07.2019 ರಂದು ಜರುಗಿದ ನಿಗಮದ ಇಆರ್‌ಸಿಯ 58ನೇ ಸಭೆಯ ನಡವಳಿಗಳು
4. ಸರ್ಕಾರದ ಆದೇಶ ಸಂಖ್ಯೆ: ಜಸಂಇ 06 ಎಂಎಂಎಂ 2017 ಬೆಂಗಳೂರು, ದಿನಾಂಕ 21.08.2019.
5. ಸೂಪರಿಂಟೆಂಡಿಂಗ್ ಇಂಜಿನಿಯರ್ ವಾರಾಹಿ ಯೋಜನಾ ವೃತ್ತ ಸಿದ್ದಾಪುರ ಇವರ ಪತ್ರ ಸಂ. 539 ದಿನಾಂಕ : 09.09.2019.

ಪ್ರಸ್ತಾವನೆ:

ಉಡುಪಿ ಜಿಲ್ಲೆ,ಕುಂದಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಸೌಕುರು ಗ್ರಾಮದ ಬಳಿ ಏತ ನೀರಾವರಿಯನ್ನು ನಿರ್ಮಿಸಿ ಸೌಕುರು,ಕುರ್ಕುಂಜೆ,ಕೆಂಜನೂರು,ದೇವಲ್ಕುಂದ,ಕನ್ಯಾನ ಮತ್ತು ಸುತ್ತಮುತ್ತಲಿನ ಗ್ರಾಮಗಳ 1350 ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯವನ್ನು ಒದಗಿಸಲು ಸ್ಥಳೀಯ ರೈತರು ಹಾಗೂ ಜನಪ್ರತಿನಿಧಿಗಳು ಒತ್ತಾಯಿಸಿದ ಕಾರಣ, ಸದರಿ ಯೋಜನೆಯು 2019-20ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾಗಿರುತ್ತದೆ.

ಸದರಿ ಯೋಜನೆಗೆ ಕುಂದಾಪುರ ತಾಲ್ಲೂಕಿನ ಬಳ್ಕೂರು ಎಂಬಲ್ಲಿ ವಾರಾಹಿ ಯೋಜನೆಯಡಿ ವಾರಾಹಿ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಉಪ್ಪು ನೀರು ತಡೆ ಅಣೆಕಟ್ಟಿನ ಮೇಲ್ಭಾಗದಲ್ಲಿ ಸೌಕುರು ಗ್ರಮದ ಹತ್ತಿರ ಏತ ನೀರಾವರಿ ನಿರ್ಮಿಸಿ 0.589 ಟಿ.ಎಂ.ಸಿ ನೀರನ್ನು ಏರುಕೊಳವೆ ಮುಖಾಂತರ ಹರಿಸಿ 1350 ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸುವ ಯೋಜನೆಯ ಉದ್ದೇಶವಾಗಿರುತ್ತದೆ. ಪ್ರಸ್ತಾಪಿತ ಯೋಜನೆಗೆ ರೂ: 73.71 ಕೋಟಿಗಳ ವಿವರವಾದ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕ.ನೀ.ನಿ.ನಿ. ರವರು ಉಲ್ಲೇಖ (1) ರನ್ವಯ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.

ಉಡುಪಿ ಜಿಲ್ಲೆ,ಕುಂದಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಸೌಕುರು ಏತ ನೀರಾವರಿ ಯೋಜನೆಯ ವಿವರವಾದ ಯೋಜನಾ ವರದಿಗೆ ದಿನಾಂಕ: 06.06.2019 ರಂದು ನಡೆದ 56ನೇ ನಿಗಮ ಮಟ್ಟದ ಇ.ಆರ್.ಸಿ. ಸಭೆಯಲ್ಲಿ ತೀರುವಳಿ ನೀಡಲಾಗಿದ್ದು, ದಿನಾಂಕ: 09.07.2019 ರಂದು ನಡೆದ 88 ನೇ ನಿಗಮದ ನಿರ್ದೇಶಕರ ಮಂಡಳಿಯಲ್ಲಿ ಮಂಡಿಸಿದ್ದು, ಮಂಡಳಿಯ ಶಿಫಾರಸ್ಸಿನಂತೆ ರೂ. 73.71 ಕೋಟಿಗಳಿಗೆ ಉಲ್ಲೇಖಿತ (4) ರ ಸರ್ಕಾರದ ಪತ್ರದಲ್ಲಿ ಆಡಳಿತಾತ್ಮಕ ಅನುಮೋದನೆ ದೊರೆತಿರುತ್ತದೆ.

ಏತನ್ಮಧ್ಯೆ, ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ವಿವರವಾದ ಅಂದಾಜು ಪಟ್ಟಿಯನ್ನು ರೂ: 73.71 ಕೋಟಿ ಮೊತ್ತಕ್ಕೆ ತಯಾರಿಸಿ ಏತ ನೀರಾವರಿ ಕಾಮಗಾರಿಯ ಕರಡು ಟೆಂಡರ್ ಶೆಡ್ಯೂಲ್‌ನ್ನು ವ್ಯವಸ್ಥಾಪಕ

ನಿರ್ದೇಶಕರು, ಕ.ನೀ.ನಿ.ನಿ. ಬೆಂಗಳೂರು ಇವರಿಗೆ ನಿಗಮ ಮಟ್ಟದ ಅಂದಾಜು ಪರಿಶೀಲನಾ ಸಮಿತಿ ತೀರುವಳಿಗಾಗಿ ಪ್ರಸ್ತಾವನೆಯನ್ನು ಉಲ್ಲೇಖ (2) ರನ್ವಯ ನಿಗಮ ಕಚೇರಿಗೆ ಸಲ್ಲಿಸಲಾಗಿರುತ್ತದೆ. ಸದರಿ ಪ್ರಸ್ತಾವನೆಯನ್ನು ದಿನಾಂಕ: 03.07.2019 ರಂದು ಜರುಗಿದ ನಿಗಮದ 58 ನೇ ಅಂದಾಜು ಪರಿಶೀಲನಾ ಸಮಿತಿ ಸಭೆಯಲ್ಲಿ ಮಂಡಿಸಲಾಗಿದ್ದು, ಯೋಜನೆಗೆ ಸರ್ಕಾರದಿಂದ ಆಡಳಿತಾತ್ಮಕ ಅನುಮೋದನೆ ಪಡೆಯುವ ನಿಬಂಧನೆಯೊಂದಿಗೆ ಅಂದಾಜು ಮತ್ತು ಕರಡು ಟೆಂಡರ್ ಶೆಡ್ಯೂಲ್‌ಗಳಿಗೆ ತೀರುವಳಿ ನೀಡಲಾಗಿರುತ್ತದೆ.

ಮೇಲಿನಂತೆ ಸೂಪರಿಂಟೆಂಡಿಂಗ್ ಇಂಜಿನಿಯರ್ ವಾರಾಹಿ ಯೋಜನಾ ವೃತ್ತ ಸಿದ್ದಾಪುರ ಇವರು ಉಲ್ಲೇಖ (5) ರನ್ವಯ ಸಲ್ಲಿಸಲಾದ ಪ್ರಸ್ತಾವನೆಯನ್ನು ಈ ಕಚೇರಿಯಲ್ಲಿ ಪರಿಶೀಲಿಸಿದ್ದು, ಅಂದಾಜು ಪಟ್ಟಿಯನ್ನು 2018-19 ನೇ ಸಾಲಿನ ಜಲಸಂಪನ್ಮೂಲ ಇಲಾಖೆ ದರಸೂಚಿ, 2018-19 ನೇ ಸಾಲಿನ ಲೋಕೋಪಯೋಗಿ ಇಲಾಖೆ ದರಸೂಚಿ (ಕಟ್ಟಡ ಕಾಮಗಾರಿ ಐಟಂಗಳಿಗೆ ಹೊರತುಪಡಿಸಿ) ಹಾಗೂ KUWS & DB & KPTCL 2018-19 ದರಸೂಚಿ ದರಗಳನ್ವಯ ಹಾಗೂ 2019-20 ನೇ ಸಾಲಿನ ಎರಡನೇ ತ್ರೈಮಾಸಿಕದ ಸಿಮೆಂಟ್ ಹಾಗೂ ಸ್ಟೀಲ್ ಮಾರುಕಟ್ಟೆ ದರಗಳನ್ನು ಅಳವಡಿಸಿ ಅಂದಾಜು ಪಟ್ಟಿಯನ್ನು ತಯಾರಿಸಲಾಗಿರುತ್ತದೆ.

ಅಂದಾಜುಪಟ್ಟಿ ಮತ್ತು ಡಿಟಿಪಿಯ ಎಲೆಕ್ಟ್ರೋಮೆಕ್ಯಾನಿಕಲ್ ಮತ್ತು ವಿದ್ಯುತ್ ಸಂಪರ್ಕ ಕಾಮಗಾರಿಗಳ ಭಾಗವನ್ನು ನಿಗಮದ ಏತನೀರಾವರಿ ಸಲಹೆಗಾರರು ಪರಿಶೀಲಿಸಿದ್ದು ,ಸದರಿ ಅಂದಾಜುಪಟ್ಟಿ ಮತ್ತು ಡಿಟಿಪಿಗೆ ದಿನಾಂಕ: 03.07.2019 ರಂದು ನಡೆದ ನಿಗಮ ಮಟ್ಟದ ಇ.ಆರ್.ಸಿ.ಯ 58 ನೇ ಸಭೆಯಲ್ಲಿ ನಿಗಮದ ಏತ ನೀರಾವರಿ ಸಲಹೆಗಾರರು ಹಾಗೂ ಡಿಸೈನ್‌ವಿಂಗ್‌ನ ಕೆಲವೊಂದು ಸಲಹೆ/ಸೂಚನೆಗಳ ಪಾಲನೆಯೊಂದಿಗೆ ತೀರುವಳಿ ನೀಡಲಾಗಿರುತ್ತದೆ. ಡಿಸೈನ್‌ವಿಂಗ್‌ಸೂಚನೆಗಳ ಕ್ರಮ ಸಂ. (32.9) ರಲ್ಲಿ ಕೆಲವೊಂದು ಸಲಹೆ ಮತ್ತು ಸೂಚನೆಗಳು ಸೂಚಿಸಿದ್ದು, ಅದರನ್ವಯ ಸದರಿ ಸಲಹೆ ಮತ್ತು ಸೂಚನೆಗಳಿಗೆ ಸೂಪರಿಂಟೆಂಡಿಂಗ್ ಇಂಜನಿಯರ್‌ರವರು ಪಾಲನಾ ವರದಿ ಸಲ್ಲಿಸಿದ್ದು, ಸಲಹೆ ಮತ್ತು ಸೂಚನೆಗಳನ್ನು ಪ್ರಸ್ತುತ ಅಂದಾಜಿನಲ್ಲಿ ಅಳವಡಿಸಿರುತ್ತಾರೆ. ಅದರಂತೆ ಅಂದಾಜುಮೊತ್ತ ರೂ: 73.71 ಕೋಟಿಗಳಾಗುತ್ತಿದ್ದು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

## ::ಆದೇಶ::

ಕರ್ನಾಟಕ ನೀರಾವರಿ ನಿಗಮ ನಿಯಮಿತದ ಅಧಿಸೂಚನೆ ಪತ್ರ ಸಂ ಕನೀನಿ/ಟಿಎಸ್ ಸಿ/2013-14/3331 ದಿ:12.11.23013 ರನ್ವಯ ಮತ್ತು ಸರ್ಕಾರದ ಆದೇಶ ಸಂ: ಜಸಂಇ: 124 ಕೆಬಿಎನ್:2018 ಬೆಂಗಳೂರು ದಿನಾಂಕ: 02.08.2018 & ನಿಗಮದ ಪತ್ರ ಸಂ: 2353 ದಿನಾಂಕ: 08.08.2018ರನ್ವಯ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂ: ಜಸಂಇ/ 60/ ಕೆಬಿಎನ್/ 2016 (ಭಾಗ-1)/ ದಿನಾಂಕ: 04.12.2017ರಲ್ಲಿನ ವಿತ್ತಾಧಿಕಾರದಂತೆ ಉಡುಪಿ ಜಿಲ್ಲೆ,ಕುಂದಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಸೌಕುರು ಏತ ನೀರಾವರಿ ಯೋಜನೆ ಕಾಮಗಾರಿಯ ಅಂದಾಜುಪಟ್ಟಿಗೆ ರೂ: 73.71 ಕೋಟಿಗಳು (ರೂ. ಎಪ್ಪತ್ತು ಮೂರು ಕೋಟಿ ಎಪ್ಪತ್ತು ಒಂದು ಲಕ್ಷಗಳು ಮಾತ್ರ) ಈ ಕಛೇರಿ ಸಿಇಆರ್ ಸಂ: 179/2019-20ದಿನಾಂಕ:16.09.2019ರಲ್ಲಿ ಲೆಕ್ಕಶೀರ್ಷಿಕೆ 4701 M&MI Sowkuru Lift Irrigation Scheme ಅಡಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ತಾಂತ್ರಿಕ ಟಿಪ್ಪಣಿಯಲ್ಲಿನ ನಿಬಂಧನೆಗಳನ್ವಯ ತಾಂತ್ರಿಕ ಮಂಜೂರಾತಿಯನ್ನು ಈ ಮೂಲಕ ನೀಡಲಾಗಿದೆ.

ಸಹಿ/-
(ಜಿ.ಇ.ಯತೀಶ್‌ಚಂದ್ರನ್)
ಮುಖ್ಯ ಇಂಜಿನಿಯರ್,
ಕರ್ನಾಟಕ ನೀರಾವರಿ ನಿಗಮ ನಿಯಮಿತ,
ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ.




1



**ಕರ್ನಾಟಕ ಸರ್ಕಾರದ ನಡವಳಿಗಳು**
**(ಜಲಸಂಪನ್ಮೂಲ ಇಲಾಖೆ)**

ವಿಷಯ: ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಸೌಕೂರು ಏತ ನೀರಾವರಿ ಯೋಜನೆಯ ರೂ.73.71ಕೋಟಿಗಳ ವಿವರವಾದ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

ಓದಲಾಗಿದೆ: ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ:ಕನೀನಿ/ಟಿವಿಪಿ/ಸೌಕೂರು ಏನೀಯೋ/2019-20/1937 ದಿನಾಂಕ:16.07.2019.

****

<u>ಪ್ರಸ್ತಾವನೆ</u> :

ಮೇಲೆ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ನಿಯಮಿತ ರವರ ಪತ್ರದಲ್ಲಿ, ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಸೌಕೂರು ಗ್ರಾಮದ ಬಳಿ ಏತ ನೀರಾವರಿಯನ್ನು ನಿರ್ಮಿಸಿ, ಸೌಕೂರು, ಕರ್ಕುಂಜೆ, ಕೆಂಚನೂರು, ದೇವಲ್ಕುಂದ, ಕನ್ಯಾನಾ ಮತ್ತು ಸುತ್ತಮುತ್ತಲಿನ ಗ್ರಾಮಗಳ 1350 ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯವನ್ನು ಒದಗಿಸುವಂತೆ ಸ್ಥಳೀಯ ರೈತರು ಹಾಗೂ ಜನಪ್ರತಿನಿಧಿಗಳು ಒತ್ತಾಯಿಸುತ್ತಿರುವ ಬಗ್ಗೆ ತಿಳಿಸಿರುತ್ತಾರೆ. ಆದ್ದರಿಂದ, ಕುಂದಾಪುರ ತಾಲ್ಲೂಕಿನ ಬಳ್ಕೂರು ಎಂಬಲ್ಲಿ ವಾರಾಹಿ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಉಪ್ಪು ನೀರು ತಡೆ ಅಣೆಕಟ್ಟಿನ ಮೇಲ್ಭಾಗದಲ್ಲಿ ಸೌಕೂರು ಗ್ರಾಮದ ಹತ್ತಿರ ಏತ ನೀರಾವರಿ ನಿರ್ಮಿಸಿ 0.589 ಟಿ.ಎಂ.ಸಿ. ನೀರನ್ನು ಏರುಕೊಳವೆ ಮುಖಾಂತರ ಹರಿಸಿ, 1350 ಹೆಕ್ಟೇರ್ ಜಮೀನುಗಳಿಗೆ ನೀರಾವರಿ ಕಲ್ಪಿಸಲು ಈ ಯೋಜನೆಯನ್ನು ಕೈಗೊಳ್ಳಲು ಉದ್ದೇಶಿಸಲಾಗಿದೆ ಎಂದು ತಿಳಿಸಿರುತ್ತಾರೆ. ಸದರಿ ಯೋಜನೆಯನ್ನು 2019-20ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಲಾಗಿದೆ.

AE-5

ಮುಂದುವರೆದು, ಸದರಿ ಕಾಮಗಾರಿಯ ವಿವರವಾದ ಯೋಜನಾ ವರದಿಯನ್ನು ದಿನಾಂಕ:06.06.2019 ರಂದು ಜರುಗಿದ 56ನೇ ನಿಗಮದ ಅಂದಾಜು ಪರಿಶೀಲನಾ ಸಮಿತಿಯ ಸಭೆಯಲ್ಲಿ ಮಂಡಿಸಲಾಗಿದ್ದು, ಸಮಿತಿಯು ತೀರುವಳಿ ನೀಡಿ, ನಿಗಮದ ನಿರ್ದೇಶಕರ ಮಂಡಳಿಯ ಅನುಮೋದನೆಯೊಂದಿಗೆ ಸರ್ಕಾರಕ್ಕೆ ಆಡಳಿತಾತ್ಮಕ ಅನುಮೋದನೆ ಪಡೆಯಲು ಶಿಫಾರಸ್ಸು ಮಾಡಿರುತ್ತದೆ. ಅಂದಾಜು ಪರಿಶೀಲನಾ ಸಮಿತಿಯ ಶಿಫಾರಸ್ಸಿನಂತೆ ದಿನಾಂಕ:09.07.2019 ರಂದು ಜರುಗಿದ ನಿಗಮದ ನಿರ್ದೇಶಕರ ಮಂಡಳಿಯ 88ನೇ ಸಭೆಯಲ್ಲಿ ಮಂಡಿಸಲಾಗಿ, ಮಂಡಳಿಯು ವಾರಾಹಿ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಉಪ್ಪು ನೀರು ತಡೆ ಅಣೆಕಟ್ಟಿನ ಮೇಲ್ಭಾಗದಲ್ಲಿ ಸೌಕೂರು

ಗ್ರಾಮದ ಹತ್ತಿರ ಏತ ನೀರಾವರಿ ನಿರ್ಮಿಸಿ ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಸೌಕೂರು ಏತ ನೀರಾವರಿ ಯೋಜನೆಯ ರೂ.73.71ಕೋಟಿಗಳ ವಿವರವಾದ ಯೋಜನಾ ವರದಿಗೆ ಅನುಮೋದನೆ ನೀಡಿ, ಸರ್ಕಾರದ ಆಡಳಿತಾತ್ಮಕ ಅನುಮೋದನೆಗೆ ಶಿಫಾರಸ್ಸು ಮಾಡಿರುತ್ತದೆ ಎಂದು ತಿಳಿಸಲಾಗಿರುತ್ತದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ, ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಸೌಕೂರು ಏತ ನೀರಾವರಿ ಯೋಜನೆಯ 2018–19ನೇ ಸಾಲಿನ ದರಪಟ್ಟಿಯನ್ವಯ ತಯಾರಿಸಿರುವ ರೂ.73.71ಕೋಟಿಗಳ ವಿವರವಾದ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನೀರಾವರಿ ನಿಗಮ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 06 ಎಂಎಂಎಂ 2017**

**ಬೆಂಗಳೂರು, ದಿನಾಂಕ :21.08.2019**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಸೌಕೂರು ಏತ ನೀರಾವರಿ ಯೋಜನೆಯ 2018–19ನೇ ಸಾಲಿನ ದರಪಟ್ಟಿಯನ್ವಯ ತಯಾರಿಸಿರುವ ರೂ.73.71ಕೋಟಿ (ಎಪ್ಪತ್ತಮೂರು ಕೋಟಿ ಎಪ್ಪತ್ತೊಂದು ಲಕ್ಷ ರೂಪಾಯಿ ಮಾತ್ರ) ಮೊತ್ತದ ವಿವರವಾದ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಂಖ್ಯೆ:5647, ದಿನಾಂಕ:26.07.2019ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

[ಶ್ರೀಹರಿ ಎಸ್.ಆರ್.]
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ–1),
ಜಲ ಸಂಪನ್ಮೂಲ ಇಲಾಖೆ

ಇವರಿಗೆ:

1. ಪ್ರಧಾನ ಮಹಾಲೇಖಪಾಲರು(G&SSA),ಕರ್ನಾಟಕ, ಹೊಸ ಕಟ್ಟಡ, "ಆಡಿಟ್ ಭವನ", ಅಂಚೆಪೆಟ್ಟಿಗೆ ಸಂಖ್ಯೆ:5398,ಬೆಂಗಳೂರು–01.

## ಅನುಬಂಧ–5

**ಸೌಪರ್ಣಿಕಾ ಏತ ನೀರಾವರಿ ಯೋಜನೆಯಿಂದ ನೀರಾವರಿಗೆ ಒಳಪಡುವ ಗ್ರಾಮವಾರು ಅಚ್ಚುಕಟ್ಟು ಪ್ರದೇಶಗಳ ಮಾಹಿತಿ**

| ಕ್ರ.ಸಂ | ಗ್ರಾಮದ ಹೆಸರು | ನೀರಾವರಿಗೆ ಒಳಪಡುವ ಅಚ್ಚುಕಟ್ಟು ಪ್ರದೇಶ (ಹೆ. ನಲ್ಲಿ) |
|---|---|---|
| 1 | ಆಲೂರು | 233.25 |
| 2 | ನಾಡಾ | 239.20 |
| 3 | ಹರ್ಕೂರು | 435.27 |
| 4 | ಬಡಾಕೆರೆ | 28.73 |
| 5 | ಸೇನಾಪುರ | 175.60 |
| 6 | ವಂಡ್ಸೆ | 134.54 |
| 7 | ಕುಂದಬಾರಂದಡಿ | 230.47 |
| 8 | ನೂಜಾಡಿ | 137.99 |
| 9 | ಹಕ್ಲಾಡಿ | 115.13 |
| ಒಟ್ಟು | | 1730.18 |

## ಅನುಬಂಧ-6

**ಗ್ರಾವಿಟಿ ಮತ್ತು ರೈಸಿಂಗ್ ಮೈನ್ ಪೈಪ್‌ಲೈನ್ ಹಾದುಹೋಗುವ ಹಾಗೂ ಚೆಕ್ ಡ್ಯಾಂಗಳ ನಿರ್ಮಾಣಗೊಂಡಿರುವ ಗ್ರಾಮಗಳ ವಿವರ**

| ಕ್ರಸಂ | ಗ್ರಾವಿಟಿ ಮತ್ತು ರೈಸಿಂಗ್ ಮೈನ್ ಪೈಪ್‌ಲೈನ್ ಹಾದುಹೋಗುವ ಗ್ರಾಮಗಳ ವಿವರ | ಚೆಕ್ ಡ್ಯಾಂಗಳ ನಿರ್ಮಾಣಗೊಂಡಿರುವ ಗ್ರಾಮಗಳ ವಿವರ |
|---|---|---|
| 1 | ಆಲೂರು | ಆಲೂರು ಗ್ರಾಮ-ನಾಲಾ-1ರಲ್ಲಿ 9 |
| 2 | --- | ಸೇನಾಪುರ ಗ್ರಾಮ-ನಾಲಾ-2ರಲ್ಲಿ 10 |
| 3 | --- | ನೂಜಾಡಿ ಗ್ರಾಮ-ನಾಲಾ-3ರಲ್ಲಿ 6 |

ಅನುಬಂಧ-7

# KARNATAKA NEERAVARI NIGAM LIMITED

(A Government of Karnataka Undertaking)

ಪಾಲಕ ಇಂಜನೀಯರ್‌ರವರ ಕಛೇರಿ ಕರ್ನಾಟಕ ನೀರಾವರಿ ನಿಗಮ ನಿಯಮಿತ ನಂ-2 ವಾರಾಹಿ ಜಲಾಶಯ ಯೋಜನಾ ವಿಭಾಗ ಸಿದ್ಧಾಪುರ-576229 ಕುಂದಾಪುರ (ತಾ), ಉಡುಪಿ (ಜಿಲ್ಲೆ), ಕರ್ನಾಟಕ.

" ಅಂಚೆ-ಸ್ವೀಕೃತಿ ಧ್ವಾರದ ಮೂಲಕ "

ಸಂಖ್ಯೆ:ಕನೀನಿನಿ:ವಾಜಯೋವಿ-2:ಫಿಬಿ-1 : ಸೌಪರ್ಣಿಕಾ: 2010-11 / 1589 ದಿ: 21-02-2011

ವರ್ಕ್ ಆರ್ಡರ್ ಸಂಖ್ಯೆ : 09 /2010/11 ದಿನಾಂಕ: 21-02-2011

ಇವರಿಗೆ,

ಶ್ರೀ ಜಿ. ಶಂಕರ್
ಒಂದನೇ ದರ್ಜೆ ಗುತ್ತಿಗೆದಾರರು,
ಗಣೇಶ್ ನಗರ, ಸ್ಟೇಷನ್ ರಸ್ತೆ,
ಬಿಜಾಪುರ -586 104

ಮಾನ್ಯರೇ,

ವಿಷಯ: ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಆಲೂರು ಗ್ರಾಮದ ಬಳಿಯಲ್ಲಿರುವ ಎಡೂರುಬೈಲ್ ಎಂಬಲ್ಲಿ ಸೌಪರ್ಣಿಕ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಿಸಿ, ಸುತ್ತ ಮುತ್ತಲ ಗ್ರಾಮಗಳಿಗೆ ಕುಡಿಯುವ ನೀರು ಮತ್ತು ನೀರಾವರಿ ಸೌಲಭ್ಯವನ್ನು ಕಲ್ಪಿಸುವ ಕಾಮಗಾರಿಯ ಕರಾರು ಒಪ್ಪಂದದ ಬಗ್ಗೆ.

ಉಲ್ಲೇಖ: 1) ಮಾನ್ಯ ವ್ಯವಸ್ಥಾಪಕ ನಿರ್ದೇಶಕರು ಕನೀನಿನಿ, ಬೆಂಗಳೂರು ಇವರ ಪತ್ರ ಸಂಖ್ಯೆ: **KNN/710/TVP/2009/4078** ದಿನಾಂಕ: **17-02-2011**

2) ಈ ಕಛೇರಿ ಕರಾರು ಒಪ್ಪಂದ ಸಂಖ್ಯೆ : **09/2010-11** ದಿನಾಂಕ : **21-02-2011**

**** ***** ****

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ(2)ರಲ್ಲಿ ತಿಳಿಸಲಾದ ಟೆಂಡರ್ ಕರಾರು ಒಪ್ಪಂದಕ್ಕನುಗುಣವಾಗಿ ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಆಲೂರು ಗ್ರಾಮದ ಬಳಿಯಲ್ಲಿರುವ ಎಡೂರುಬೈಲ್ ಎಂಬಲ್ಲಿ ಸೌಪರ್ಣಿಕ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಿಸಿ, ಸುತ್ತ ಮುತ್ತಲ ಗ್ರಾಮಗಳಿಗೆ ಕುಡಿಯುವ ನೀರು ಮತ್ತು ನೀರಾವರಿ ಸೌಲಭ್ಯವನ್ನು ಕಲ್ಪಿಸುವ ಕಾಮಗಾರಿಯನ್ನು ರೂ. 8998.00 ಲಕ್ಷ (ರೂಪಾಯಿ ಎಂಟು ಸಾವಿರದ ಒಂಭತ್ತುನೂರ ತೊಂಭತ್ತ ಎಂಟು ಲಕ್ಷಗಳು ಮಾತ್ರ) ಗಳಿಗೆ ಲಮ್‌ಸಮ್ ಟರ್ನ್ ಕೀ ಆಧಾರದಲ್ಲಿ ತಮಗೆ ವಹಿಸಲಾಗಿರುತ್ತದೆ.

ಸದರಿ ಟೆಂಡರ್ ಕೆಲಸವನ್ನು ಟೆಂಡರ್ ಕರಾರು ಒಪ್ಪಂದಗಳಿಗೆ ಮತ್ತು ಷರತ್ತುಗಳಿಗೆ ಅನುಗುಣವಾಗಿ ಒಳ್ಳೆಯ ಗುಣಮಟ್ಟವನ್ನು ಕಟ್ಟುನಿಟ್ಟಾಗಿ ಕಾಪಾಡಿಕೊಂಡು ಕೆಲಸ ನಿರ್ವಹಿಸಲು ಆದೇಶಿಸಲಾಗಿದೆ. ಹಾಗೂ ಈ ಟೆಂಡರ್ ಕಾಮಗಾರಿಯ ಕಾಲಾವಧಿ, ಕಾಮಗಾರಿ ಸ್ಥಳವನ್ನು ಹಸ್ತಾಂತರಿಸಿದ ದಿನಾಂಕದಿಂದ ಹದಿನೈದು (15 ತಿಂಗಳು ಮಳೆಗಾಲ ಸೇರಿ) ತಿಂಗಳುಗಳು ಎಂಬುದನ್ನು ತಮ್ಮ ಗಮನಕ್ಕೆ ತರಲಾಗಿದೆ. ಈ ಅವಧಿಯಲ್ಲಿ ಸದರಿ ಕೆಲಸವನ್ನು ಸಂಪೂರ್ಣವಾಗಿ

ಮುಗಿಸಿ ತದ ನಂತರ ಇಪ್ಪತ್ತ ನಾಲ್ಕು (24 ತಿಂಗಳು) ತಿಂಗಳುಗಳ ಅವಧಿಯ ನಿರ್ವಹಣೆಯನ್ನು ಕೈಗೊಂಡು ಸು
ಇಲಾಖೆಗೆ ವಹಿಸಿಕೊಡಬೇಕಾಗಿ ಸೂಚಿಸಲಾಗಿದೆ.

ಸದರಿ ಟೆಂಡರ್ ಕೆಲಸವನ್ನು ಪ್ರಾರಂಭಿಸಲು ಮಾರ್ಕ್‌ಔಟ್ ಮತ್ತು ಹೆಚ್ಚಿನ ವಿವರಗಳನ್ನು ಕೂಡಲೇ ಕಾರ್ಯಪಾಲಕ ಇಂಜಿನೀಯರ್, ಕನೀನಿನಿ, ನಂ.4, ವಾರಾಹಿ ಜಲಾಶಯ ಯೋಜನಾ ಉಪವಿಭಾಗ, ಸಿದ್ದಾಪುರ, ಜಿಲ್ಲೆ ಇವರನ್ನು ಸಂಪರ್ಕಿಸಬೇಕಾಗಿ ಈ ಮೂಲಕ ಸೂಚಿಸಲಾಗಿದೆ.

ತಮ್ಮ ವಿಶ್ವಾಸಿ

ಸಹಿ/-
ಕಾರ್ಯಪಾಲಕ ಇಂಜಿನೀಯರ್
ಕರ್ನಾಟಕ ನೀರಾವರಿ ನಿಗಮ ನಿಯಮಿತ
ನಂ-2 ವಾರಾಹಿ ಜಲಾಶಯ ಯೋಜನಾ ವಿಭಾಗ,
ಸಿದ್ದಾಪುರ ಉಡುಪಿ ಜಿಲ್ಲೆ.

ಪ್ರತಿಯನ್ನು ಅಡಕಗಳೊಂದಿಗೆ:

1. ಮುಖ್ಯ ಇಂಜಿನೀಯರ್, ಕನೀನಿನಿ, ವಾರಾಹಿ ಯೋಜನಾ ವಲಯ, ಸಿದ್ದಾಪುರ ಇವರ ಅವಗಾಹನೆಗಾಗಿ ಸಲ್ಲಿಸಲಾ
2. ಅಧೀಕ್ಷಕ ಅಭಿಯಂತರರು ಕನೀನಿನಿ, ವಾರಾಹಿ ಯೋಜನಾ ವೃತ್ತ, ಸಿದ್ದಾಪುರ, ಇವರ ಅವಗಾಹನೆಗಾಗಿ ಸಲ್ಲಿಸಲಾ
3. ಮಹಾಲೇಖಪಾಲಕರು (ಡಬ್ಲ್ಯೂ ಅಂಡ್ ಎಫ್ ) ಆಡಿಟ್-2, ಹೊಸಕಟ್ಟಡ, ಬೆಂಗಳೂರು ಇವರ ಅವಗಾ ಸಲ್ಲಿಸಲಾಗಿದೆ.
4. ಮುಖ್ಯ ಲೆಕ್ಕಾಧಿಕಾರಿಗಳು, ಕನೀನಿನಿ, ವಾಲ್ಮೀ ಕಟ್ಟಡ, ಧಾರವಾಡ ಇವರ ಅವಗಾಹನೆಗಾಗಿ ಸಲ್ಲಿಸಲಾಗಿದೆ.
5. ಸಹಾಯಕ ಕಾರ್ಯಪಾಲಕ ಇಂಜಿನೀಯರ್, ಕನೀನಿನಿ ನಂ-1 ಗುಣ ನಿಯಂತ್ರಣ ಉಪವಿಭಾಗ, ಸಿದ್ದಾಪುರ ಮಾಹಿತಿಗಾಗಿ ರವಾನಿಸಿದೆ.
6. ಸಹಾಯಕ ಕಾರ್ಯಪಾಲಕ ಇಂಜಿನೀಯರ್ ಕನೀನಿನಿ, ನಂ-4, ವಾರಾಹಿ ಜಲಾಶಯ ಯೋಜನಾ ಉಪ ವಿಭಾಗ ಇವರಿಗೆ ಮಾಹಿತಿಗಾಗಿ ಹಾಗೂ ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.
7. ಮೂಲ ಟೆಂಡರ್ ಕರಾರು ಒಪ್ಪಂದದ ಪ್ರತಿಯೊಂದಿಗೆ ವಿಭಾಗದ ನಗದು ಶಾಖೆಗೆ ಕಳುಹಿಸಿ ಸದರಿ ಪ್ರತಿಯನ್ನು ಕವಚದಲ್ಲಿ ಜೋಪಾನವಾಗಿ ಇಡಲು ಸೂಚಿಸಲಾಗಿದೆ.
8. ನಕಲಿ ಟೆಂಡರ್ ಕರಾರು ಒಪ್ಪಂದದ ಪ್ರತಿಯೊಂದಿಗೆ ವಿಭಾಗದ ಲೆಕ್ಕ ಶಾಖೆಗೆ (ಎಸ್-2 ) ಮಾಹಿತಿ ಹಾ ಕ್ರಮಕ್ಕಾಗಿ ನೀಡಲಾಗಿದೆ.

ಕಾರ್ಯಪಾಲಕ ಇಂಜಿನೀಯರ್
ಕರ್ನಾಟಕ ನೀರಾವರಿ ನಿಗಮ ನಿಯಮಿತ
ನಂ-2 ವಾರಾಹಿ ಜಲಾಶಯ ಯೋಜನಾ ವಿಭಾಗ,
ಸಿದ್ದಾಪುರ ಉಡುಪಿ ಜಿಲ್ಲೆ.